ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



**ಕರ್ನಾಟಕ ವಿಧಾನ ಪರಿಷತ್ತು**

ನೂರ ನಲವತ್ತಮೂರನೆಯ ಅಧಿವೇಶನ

ಮಂಗಳವಾರ, ದಿನಾಂಕ: 2ನೇ ಫೆಬ್ರುವರಿ, 2021

ಮೈಸೂರು ರಿಂಗ್ ರಸ್ತೆಯಲ್ಲಿ ದೀಪ ಅಳವಡಿಕೆ ಮತ್ತು ಕಸ ವಿಲೇವಾರಿ ಬಗ್ಗೆ

ಶ್ರೀ ಎಸ್. ನಾಗರಾಜ್ (ಸಂದೇಶ ನಾಗರಾಜ್) (ಸ್ಥಳೀಯ ಸಂಸ್ಥೆಗಳಿಂದ ಚುನಾಯಿತರಾದವರು) :-

226(269) ಮಾನ್ಯ ನಗರಾಭಿವೃದ್ಧಿ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ಮೈಸೂರು ನಗರದ ರಿಂಗ್ ರಸ್ತೆಯಲ್ಲಿ ರಾತ್ರಿ ವೇಳೆ ಬೀದಿ ದೀಪಗಳನ್ನು (ಹೈಮಾಸ್ಟ್/ಸೋಡಿಯಂ ವೇಪರ್/ಎಲ್.ಇ.ಡಿ) ಸರಿಯಾಗಿ ಅಳವಡಿಸದೇ ಇರುವುದರಿಂದ ಕತ್ತಲಿನ ವಾತಾವರಣದಲ್ಲಿ ಸಂಚರಿಸಲು ಸಾರ್ವಜನಿಕರು ಭಯಭೀತರಾಗಿ ತೊಂದರೆಗೆ ಒಳಗಾಗಿರುವುದು ರಿಂಗ್ ರಸ್ತೆಯಲ್ಲಿ ಅಪರಾಧ ಪ್ರಕರಣಗಳು ಹೆಚ್ಚಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ;

(ಆ) ರಿಂಗ್ ರಸ್ತೆಯಲ್ಲಿ ವ್ಯವಸ್ಥಿತವಾಗಿ ರಸ್ತೆ ಉದ್ದಕ್ಕೂ ಹಾಗೂ ಹೈಮಾಸ್ಟ್ /ಸೋಡಿಯಂ ವೇಪರ್ ಎಲ್.ಇ.ಡಿ. ಬೀದಿ ದೀಪಗಳನ್ನು ಅಳವಡಿಸಿ ಬೆಳಗಿಸಲು ಕ್ರಮ ಜರುಗಿಸಲಾಗುವುದೇ ;

(ಇ) ರಿಂಗ್ ರಸ್ತೆಯ ಎರಡೂ ಬದಿಯಲ್ಲಿ ಸಾರ್ವಜನಿಕರು ಕಟ್ಟಡ ತ್ಯಾಜ್ಯ ಹಾಗೂ ಇತರೆ ತ್ಯಾಜ್ಯವನ್ನು ತಂದು ಸುರಿಯುತ್ತಿದ್ದು, ರಸ್ತೆಯ ಎರಡೂ ಬದಿ ತ್ಯಾಜ್ಯದ ರಾಶಿಗಳಿದ್ದು, ಇವುಗಳನ್ನು ಇಲ್ಲಿಂದ ವಿಲೇವಾರಿ ಮಾಡಲು ಹಾಗೂ ಸಾರ್ವಜನಿಕರು ತ್ಯಾಜ್ಯವನ್ನು ತಂದು ಇಲ್ಲಿ ಸುರಿಯದಂತೆ ಕಟ್ಟಳೆ ಮಾಡಿ ಸಿ.ಸಿ. ಟಿ.ವಿ. ಕ್ಯಾಮೆರಾ ಅಳವಡಿಸಲು ಕ್ರಮ ಜರುಗಿಸಲಾಗುವುದೇ ;

(ಈ) ರಿಂಗ್ ರಸ್ತೆಯ ಎರಡೂ ಬದಿಯಲ್ಲಿ ಸ್ಥಳೀಯ ಆಲ, ಬೇವು, ಸಂಪಿಗೆ, ನೇರಳೆ ಮೊದಲಾದ ಮರಗಿಡಗಳನ್ನು ವ್ಯವಸ್ಥಿತವಾಗಿ ಬೆಳೆಸಲು ಮಧ್ಯದಲ್ಲಿ ಡಿವೈಡರ್ ಜಾಗದಲ್ಲಿ ಹೂವಿನ ಗಿಡಗಳನ್ನು ಬೆಳೆಸಲು ಕ್ರಮ ಜರುಗಿಸಲಾಗುವುದೇ ?